Mangalore Canarese Readers, New Series.

# CANARESE PRIMER

ADAPTED TO THE REQUIREMENTS OF THE

## INFANT STANDARD

APPROVED BY THE MADRAS TEXT-BOOK COMMITTEE
AND RECOGNISED BY THE
DIRECTOR OF PUBLIC INSTRUCTION, MADRAS

Thirteenth Edition: 10,000 Copies

# ಕನ್ನಡ ಮೂಲಪಾಠಕ

ಬಾಲಕ ದರ್ಜೆಯ ಉಪಯೋಗಾರ್ಥವಾದದ್ದು




MANGALORE
BASEL MISSION BOOK AND TRACT DEPOSITORY
1908



Price: 1 A. 6 P.]  [ಕ್ರಯ: ೧ ಆ. ೬ ಪೈ.

# CANARESE PRIMER

BY

CHR. MABEN

ADAPTED TO THE REQUIREMENTS OF THE INFANT STANDARD

APPROVED BY THE MADRAS TEXT-BOOK COMMITTEE
AND RECOGNISED BY THE
DIRECTOR OF PUBLIC INSTRUCTION, MADRAS

Thirteenth Edition: 10,000 Copies

# ಕನ್ನಡ ಮೂಲಪಾಠಕ

ಬಾಲಕ ದರ್ಜೆಯ ಉಪಯೋಗಾರ್ಥವಾದದ್ದು




MANGALORE
BASEL MISSION BOOK AND TRACT DEPOSITORY
1908

# ಉಪಾಧ್ಯಾಯರಿಗೆ ಸೂಚನೆಗಳು.

ವಿದ್ಯಾಭ್ಯಾಸಕ್ಕಾಗಿ ಸಾಲೆಯಲ್ಲಿ ಮಾಡುವ ಮೊದಲನೇ ಕೆಲಸವು ಅಕ್ಷರಗಳನ್ನು ಕಲಿಸುವದು ಆಗಿರುತ್ತದೆ. ಅಕ್ಷರಗಳು ಎಂದರೆ ನಾವು ಬಾಯಿಯಿಂದ ಹೇಳುವ ಶಬ್ದಗಳನ್ನು ಬರೆದು ತೋರಿಸುವದಕ್ಕಾಗಿ ಕಲ್ಪಿತವಾದ ಚಿಹ್ನೆಗಳಷ್ಟೆ. ಹೀಗಿರಲಾಗಿ ಶಬ್ದಗಳು ಇರದಿದ್ದರೆ, ಅಕ್ಷರಗಳೂ ಇರುತ್ತಿದ್ದಿಲ್ಲ. ಆದ್ದರಿಂದ ಮಾತು ಮುಖ್ಯವಾದದ್ದೂ ಮೊದಲನೇದೂ ಆಗಿದೆ. ಮಕ್ಕಳು ಒಂದೆರಡು ವರುಷ ಪ್ರಾಯದವರಾಗುವಾಗ ಅಕ್ಷರಗಳನ್ನು ಕಲಿಯದಿದ್ದರೂ, ಮನೆಯವರು ಮಾತಾಡುವ ದೊಡ್ಡ ದೊಡ್ಡ ವಾಕ್ಯಗಳಿಂದ ಮೊದಲಾಗಿ ವಸ್ತುವಾಚಕನಾಮ ಮೊದಲಾದ ಶಬ್ದಗಳನ್ನು ಹೆಕ್ಕಿತೆಗೆದು, ಅನಂತರ ಸಣ್ಣ ಸಣ್ಣ ವಾಕ್ಯಗಳನ್ನು ರಚಿಸುವುದಕ್ಕೆ ಕಲಿಯುತ್ತಾರೆ. ಹೀಗಿರಲಾಗಿ ಅದೇ ರೀತಿಯಲ್ಲಿ ಮಾತುಗಳನ್ನೇ ಹಿಡಿದು ಅಕ್ಷರಗಳನ್ನು ಕಲಿಸುವದು ಉತ್ತಮವೂ ಮಕ್ಕಳಿಗೆ ಸಂತೋಷಕರವಾದ ಕೆಲಸವೂ ಆಗಿರುವುದು. ಇದಕ್ಕೆ ತಕ್ಕ ಉಪಾಯವನ್ನು ಈ ಚಿಕ್ಕ ಪುಸ್ತಕದಲ್ಲಿ ಕಾಣಿಸಿದೆ.

ಈ ಪಾಠಗಳನ್ನು ಯಾವ ರೀತಿಯಲ್ಲಿ ಕೊಡಬೇಕೆಂಬುದನ್ನು ಕುರಿತು ಕೆಲವು ಸಾಮಾನ್ಯ ಸೂಚನೆಗಳನ್ನು ಉಪಾಧ್ಯಾಯರ ತಿಳುವಳಿಕೆ ಬಗ್ಯೆ ಕೆಳಗೆ ಹೇಳುತ್ತೇವೆ.

1. ಈ ಪುಸ್ತಕದಲ್ಲಿ ಅಲ್ಲಲ್ಲಿ ಚಿತ್ರಗಳು ಕೊಟ್ಟಿರುತ್ತವೆ. ಈ ಚಿತ್ರಗಳಿಗೂ ಪಾಠಕ್ಕೂ ಒಂದು ಸಂಬಂಧವಿದೆ. ಚಿತ್ರದಲ್ಲಿ ಕಾಣುವ ವಸ್ತು ಮೃಗ ಮುಂತಾದವುಗಳ ಹೆಸರನ್ನು ಉಚ್ಚರಿಸುವಾಗ್ಯೆ, ಹಿಂದೆ ಕಲಿಯದ ಒಂದೆರಡು ಹೊಸ ಅಕ್ಷರಗಳಾಗಲಿ, ಹಿಂದೆ ಕಲಿತ ಅಕ್ಷರದ ಒಂದು ಹೊಸ ರೂಪವಾಗಲಿ ಧ್ವನಿತವಾಗುತ್ತದೆ. ಆದ್ದರಿಂದ ಮೊದಲಾಗಿ ಚಿತ್ರದ ಕಡೆಗೆ ಹುಡುಗರ ಲಕ್ಷ್ಯವನ್ನು ತಂದು, ಸಾಧ್ಯವಾದರೆ, ಆ ವಸ್ತುವನ್ನೇ ಪ್ರಯತ್ನವಿಟ್ಟು ತಂದು ತೋರಿಸಿ, ಅದರ ಹೆಸರನ್ನು ಹೇಳಿಸಿ, ಅಥವಾ ಹೇಳಿಕೊಟ್ಟು, ಅದನ್ನು ಕುರಿತು ಚಿಕ್ಕ ಸಂಭಾಷಣೆ ನಡಿಸಿ, ಆ ಶಬ್ದವನ್ನು ಬರೆದು, ಅದರಲ್ಲಿರುವ ಹೊಸ ಅಕ್ಷರವನ್ನು ಕಲಿಸತಕ್ಕದ್ದು. ಆ ಹೆಸರಿನಲ್ಲಿ ಧ್ವನಿತವಾಗುವ ಅಕ್ಷರವು ಹಿಂದೆ ಕಲಿತ ಅಕ್ಷರದ ಹೊಸ ಗುಣಿತಾಕ್ಷರವಾಗಿದ್ದರೆ, ಆ ಹೊಸ ರೂಪವನ್ನು ಹಿಂದೆ ಕಲಿತ ಬೇರೆ ವ್ಯಂಜನಗಳಿಗೂ ಕೊಟ್ಟು ಓದಿಸತಕ್ಕದ್ದು. ಪಾಠದಲ್ಲಿ ಕೊಟ್ಟಿರುವ ಒಂದೆರಡು ಅಕ್ಷರಗಳಿಗೆ ಆ ಗುಣಿತವನ್ನು ಮಾಡಿ ಉಪಾಧ್ಯಾಯನು ಉಚ್ಚರಿಸಿ ತೋರಿಸತಕ್ಕದ್ದು; ಮಿಕ್ಕಾದವುಗಳಿಗೆ ಉಪಾಧ್ಯಾಯನು ಗುಣಿತಮಾಡಿ ಹಲಿಗೆಯ ಮೇಲೆ ಬರೆಯಬೇಕು, ಹುಡುಗರು ಉಚ್ಚರಿಸಬೇಕು.

2. ಎಲ್ಲಾ ಅಕ್ಷರಗಳನ್ನು, ವಿಶೇಷವಾಗಿ ಮಹಾ ಪ್ರಾಣಗಳನ್ನು, ಚಿತ್ರಗಳ ಮೂಲಕ ಹುಡುಗರ ಮನಸ್ಸಿಗೆ ತರುವುದಕ್ಕೆ ಅನುಕೂಲ ಇರುವುದಿಲ್ಲ; ಚಿತ್ರ ಇಲ್ಲದ ಪಾಠಗಳಲ್ಲಿ ಮಕ್ಕಳು ಸುಲಭವಾಗಿ ಗ್ರಹಿಸಬಹುದಾಗುವ ಒಂದು ಶಬ್ದದಿಂದಲೇ ಆ ಪಾಠಗಳಲ್ಲಿ ಕಲಿಸಬೇಕಾಗುವ ಹೊಸ ಅಕ್ಷರಗಳನ್ನು ಹೇಳಿಕೊಡತಕ್ಕದ್ದು. ಅಂಥಾ ಶಬ್ದವನ್ನು ಸಾಧಾರಣವಾಗಿ ಪಾಠದ ಆದಿಶಬ್ದವಾಗಿ ಕೊಟ್ಟಿದೆ.

3. ಸರ್ಪದ ಚಿತ್ರ ಇರುವಲ್ಲಿ ಅರ್ಧಾಕ್ಷರಗಳನ್ನು ಮಾಡುವ ರೀತಿಯನ್ನೂ, ಚಕ್ರದ ಚಿತ್ರ ಇರುವಲ್ಲಿ ಒತ್ತಕ್ಷರಗಳನ್ನು ಓದುವ ಕ್ರಮವನ್ನೂ, ಸಿಂಹದ ಚಿತ್ರ ಇರುವಲ್ಲಿ ಅನುಸ್ವಾರದ ಶುದ್ಧ ಉಚ್ಚಾರಣೆಯನ್ನೂ ಕಲಿಸತಕ್ಕದ್ದು. ಒತ್ತಕ್ಷರಗಳನ್ನು ಓದುವಲ್ಲಿ, ಮೇಲಿನ ಅಕ್ಷರವನ್ನು ಅರ್ಧವಾಗಿಯೂ ಒತ್ತಾಗಿರುವ ಅಕ್ಷರವನ್ನು ಪೂರ್ಣವಾಗಿಯೂ ಉಚ್ಚರಿಸಬೇಕೆಂಬುದನ್ನು ಅಲ್ಲಲ್ಲಿ ಹುಡುಗರ ಲಕ್ಷ್ಯಕ್ಕೆ ತರತಕ್ಕದ್ದು.

4. ಅಕ್ಷರಗಳನ್ನು ಬರೆಯುವುದಕ್ಕೆ ಕಲಿಸುವಾಗ ಒಂದೊಂದು ಅಕ್ಷರವನ್ನು ಎಲ್ಲಿ ಸುರು ಮಾಡಬೇಕು, ಎಲ್ಲಿ ಮುಗಿಸಬೇಕು ಎಂಬುದನ್ನು ಮಕ್ಕಳಿಗೆ ಚೆನ್ನಾಗಿ ತೋರಿಸಿ ಕೊಡತಕ್ಕದ್ದು. ಆಯಾ ಅಕ್ಷರಗಳನ್ನು ಬರೆಯುವುದು ಮಕ್ಕಳಿಗೆ ಸುಲಭವಾಗುವ ಹಾಗೆ ಪುಸ್ತಕವನ್ನು ಸುರು ಮಾಡುವ ಮೊದಲು ಕೆಲವು ದಿನ ಅವರಿಗೆ ಕೆಳಗೆ ಕಾಣಿಸಿರುವ ಚಿಹ್ನೆಗಳನ್ನು ಮಾಡುವುದಕ್ಕೆ ಕಲಿಸತಕ್ಕದ್ದು: ○ ⬭ ∩ ∪ —— ⁓ ∿

5. ಓದುವಾಗಲೇ ಬರೆಯುವ ಅಭ್ಯಾಸವು ಸುಲಭವಾಗುವ ಹಾಗೆ ಮಕ್ಕಳು ಸುಲಭವಾಗಿ ಬರೆಯಬಹುದಾದ ಅಕ್ಷರಗಳನ್ನೇ ಪಾಠಗಳಲ್ಲಿ ಮೊದಲಾಗಿ ಕೊಡುತ್ತಾ ಬಂದಿದ್ದೇವೆ. ಕೋಪಿ ಬರೆಯುವುದಕ್ಕಾಗಿ ಆಯಾ ಪಾಠಗಳ ಅಂತ್ಯದಲ್ಲಿ ಒಂದೊಂದು ಗಾದೆ ಕೊಟ್ಟಿರುತ್ತದೆ.

6. ಕಥೆಗಳು ಅಥವಾ ವಿಷಯಪಾಠಗಳು ಇರುವಲ್ಲಿ, ಅವುಗಳನ್ನು ಒಮ್ಮೆಗೆನೇ ಓದಿಸದೆ ಆ ಕಥೆಯನ್ನು ಉಪಾಧ್ಯಾಯನು ಮೊದಲು ಬಾಯಿಯಿಂದ ಮಕ್ಕಳಿಗೆ ಮನೋರಂಜಕವಾಗುವಂತೆ ಹೇಳತಕ್ಕದ್ದು; ವಿಷಯಪಾಠಗಳ ಪಕ್ಷದಲ್ಲಿ ಸಹ ಉಪಾಧ್ಯಾಯನು ಆ ಪಾಠದ ಸಂಗತಿಗಳನ್ನು ಕುರಿತು ಮೊದಲು ಮಕ್ಕಳೊಂದಿಗೆ ಸಂಭಾಷಣೆ ಮಾಡತಕ್ಕದ್ದು. ಬಳಿಕ ಮಕ್ಕಳಿಂದ ಅದನ್ನು ಓದಿಸತಕ್ಕದ್ದು.

7. ಪುಸ್ತಕದಲ್ಲಿರುವ ಚಿತ್ರಗಳನ್ನು ಉಪಾಧ್ಯಾಯರು ಮಕ್ಕಳಿಗೆ ವಿಷಯಪಾಠಗಳನ್ನು ಕೊಡುವುದಕ್ಕೆ ಪ್ರಯೋಗಿಸುವರೆಂತ ಕೋರುತ್ತೇವೆ. ಅನುಕೂಲವಿದ್ದಷ್ಟಕ್ಕೆ ಆಯಾ ಚಿತ್ರವನ್ನು ಕುರಿತು ಪುಸ್ತಕದಲ್ಲಿಯೂ ಸಣ್ಣ ಸಣ್ಣ ಪಾಠ ಮಾಡಿದೆ. ಅದಲ್ಲದೆ ಬಾಲಕದರ್ಜೆಗೆ ಅವಶ್ಯವಾದ ಇತರ ಸಂಗತಿಗಳು ಸಹ ಅಲ್ಲಲ್ಲಿ ಸೇರಿಸೋಣಾಗಿವೆ.

8. ಮಕ್ಕಳು ಕೆಲವು ಪಾಠಗಳನ್ನು ಓದಿ ಆದ ಮೇಲೆ, ತಾವು ಕಲಿತ ಆಯಾ ಅಕ್ಷರಗಳನ್ನು ಸರಿನೋಡಬಹುದಾಗುವ ಹಾಗೆಯೂ ಕಾಗುಣಿತಾಕ್ಷರಗಳನ್ನು ರೂಪಿಸುವ ವಿಧವನ್ನು ಚೆನ್ನಾಗಿ ನೋಡಿ ಕಲಿಯುವ ಹಾಗೆಯೂ ಅಕ್ಷರಮಾಲೆಯು ಕಡೆಯಲ್ಲಿ ಕೊಡೋಣಾಗಿದೆ.

---

1. ೧.



# ಅ ರ

ಅ. ರ. ಅ. ಅರ. ರ. ಅ. ಅರ.

---

2. ೨.

# ಆ ಈ

| | |
|---|---|
| ಅ | ಆ |

ಅ. ಆ. ರ. ಈ. ಆ ಅರ. ಈ ಅರ.

---

3. ೩.



# ದ ನ

ಅ. ದ. ಈ. ರ. ನ. ಆ. ದ. ನ. ದನ.

ಅರ. ದನ. ನರ. ಆ ಅರ. ಈ ದನ.

---

**4.** ೪.

ರ ರಿ  ದ ದಿ

ಅ. ಆ. ದ. ನ. ದನ. ನ. ರಿ. ನರಿ. ದಿ. ನ. ದಿನ.

ನ. ರಿ. ದಿ. ನದಿ. ಈ ನರಿ. ಆ ದಿನ. ಅರ.

---

**5.** ೫.



ಡ ಡಿ ಡು

ರ ರು ದ ದು

| ದ ಡ |
|---|

ದ. ಡ. ದಡ. ಆಡು. ಅ. ದು. ಅದು. ಅಡಿ.

ಆರು. ಈಡು. ಆರು ಅಡಿ. ಅದು ನರಿ.

ಈ ಆಡು. ನಡಿ. ನದಿ. ನಡು.

---

6. ೬.



# ಗ ಗಾ ಗಿ ಗು
# ರ ರಾ ದ ದಾ ನ ನಾ

| ಗ ನ |
| --- |

ಆ. ಗ. ಆಗ. ಈಗ. ಗಾ. ಡಿ. ಗಾಡಿ. ರಾಗಿ.
ಗಿ. ಡ. ಗಿಡ. ದಾ. ರಿ. ದಾರಿ. ಗು. ಡಿ. ಗುಡಿ.
ಅದು ಆಡು. ರಾಗಿ ಗಿಡ. ನಾನಾ. ದಾರ.

---

7. ೭.

ಇ  ಲ

# ಲ ಲಾ ಲಿ ಲು

ಇರು. ಇಡು. ಇದು. ಆಲ. ಆಗು. ಲಾಗ.
ಅದು ಆಡು. ಇದು ಇಲಿ. ನಾಡು. ಆರು ಇಲಿ.
ಇದು ದಾರಿ. ಅದು ನಾಡು. ಆರು ನದಿ.

---

8. ೮.



# ಉ ಊ

| | | | | | |
|---|---|---|---|---|---|
| ಅ | ಆ | ಇ | ಈ | ಉ | ಊ |
| ‌ | ಾ | ಿ | ೀ | ು | ೂ |
| ರ | ರಾ | ರಿ | ರೀ | ರು | ರೂ |
| ದ | ದಾ | ದಿ | ದೀ | ದು | ದೂ |
| ಗ | ಗಾ | ಗಿ | ಗೀ | ಗು | ಗೂ |
| ನ | ನಾ | ನಿ | ನೀ | ನು | ನೂ |
| ಲ | ಲಾ | ಲಿ | ಲೀ | ಲು | ಲೂ |

ಅದು. ಇದು. ಉಡು. ಊರು. ಊದು.
ದಿನ. ದೀನ. ರೂಢಿ. ನಾನು. ನೀನು.
ನೀರು. ಗೀರು. ಗೂಡು. ದೂರು. ನೂಲು.

9. ೯.



ಸ ಸಾ ಸಿ ಸೀ ಸು ಸೂ | ನ ಸ |

ದಾಸ. ಸಸಿ. ಸೀಸ. ಸಾಲ ದಾಸಿ.
ಸಾರು. ಅರಸ. ಅಗಸ. ಗರಗಸ. ನೂಲು.

ಇದು ಗರಗಸ. ಅದು ರಾಗೀ ಸಸಿ. ಇದು ನೂಲು. ಅದು ಗೂಡು. ಇದು ಸೀಸ. ನಾನು ದೀನ.

---

10. ೧೦.

ಡ್ಡ ಡ್ಡ ಗ್ಗ

ಗಿಡ. ಗಿಡ್ಡ. ದಡ. ದಡ್ಡ. ಆಗ. ಅಗ್ಗ.
ಉದ್ದ. ಉದ್ದು. ಗಡ್ಡ. ಅದು. ಅದ್ದು. ದುಡ್ಡು.

---

**11.** **೧೧.**

# ನ್ನ ಲ್ಲ

ಅನ್ನ. ನನ್ನ. ನಿನ್ನ. ನುಡಿ. ಇಲಿ.
ಇಲ್ಲ. ನನ್ನದು. ನಿನ್ನದು. ಅಲ್ಲಿ. ಇಲ್ಲಿ.

ಅದು ನನ್ನ ದನ. ಇದು ನಿನ್ನ ಆಡು. ಈ ಗರಗಸ ನನ್ನದು. ಆ ಅರ ನಿನ್ನದು. ಇದು ಉದ್ದಿನ ಸಸಿ. ಅದು ರಾಗೀ ಸಸಿ. ರಾಗಿ ಈಗ ಅಗ್ಗ. ಆ ಊರು ದೂರ. ನೀರು ಅಲ್ಲಿ ಇಲ್ಲ. ಅದು ಇಲಿ ಅಲ್ಲ. ಅದು ಅನ್ನ; ಇದು ಸಾರು.

---

**12.** **೧೨.**





# ಕ ಕಾ ಕಿ ಕೀ ಕು ಕೂ ಕ್ಕ | ಕ |

ಕರು. ಕಾಲು. ಕೀಲು. ಕುರಿ. ಕೂಗು.
ಕೂಸು. ನೂಕು. ಅಕ್ಕ. ಅಕ್ಕಿ. ಕಸ.

ಅಕ್ಕನ ಕೂಸು. ಅಕ್ಕಿ ಈಗ ಅಗ್ಗ. ಕಸ ಗುಡಿಸು. ಅದು ಕಾಗದ. ನೀರು ಕುಡಿ. ಅದು ನಿನ್ನ ದನ. ಇದು ನನ್ನ ಕುರಿ. ಅದು ಕಲ್ಲು. ಇದು ನಿನ್ನ ಕಾಲು.

---

13. ೧೩.

ತ  ಳ

| ಕ | ತ |
|---|---|

ತ ತಾ ತಿ ತೀ ತು ತೂ

ಳ ಳಾ ಳಿ ಳೀ ಳು ಳೂ ಳ್ಳ

ಆತ. ತಾಳ. ತೀನಿ. ತುದಿ. ತೂತು.

ಗಾಳ. ತಾಳಿ. ತಡ. ಕಳ್ಳ. ಸುಳ್ಳು.

ಇದು ನನ್ನ ಅಕ್ಕನ ತಾಳ. ಅದು ದನದ ತೀನಿ. ಆ ಕಳ್ಳ ನನ್ನ ತಾಳ ಕದ್ದನು.

---

14. ೧೪.

ವ ವಾ ವಿ ವೀ ವು ವೂ ವ್ವ

| ವ |
|---|

ಅವ. ವಾರ. ನಾವು. ಅವು. ಅವ್ವ.

ಈತ. ವೀರ. ನೀವು. ಇವು. ಅವರು.

ಇದು ಅವನ ದನ. ಅದು ಅವ್ವನ ಕರು. ಇವನ ಅಕ್ಕ ಕುರುಡಿ. ಅದು ನನ್ನ ಆಕಳು. ನಾವೂ ನೀವೂ ಆಡುವಾ.

ವ ವಾ ವಿ ವೀ ವು ವೂ ವ್ವ

---

15. ೧೫.



# ಮ ಮಾ ಮಿ ಮೀ ಮು ಮೂ ಮ್ಮ

| ವ ಮ |
|---|

| | | |
|---|---|---|
| ಮಗ. | ಮರ. | ಮಾವು. |
| ಮಾವ. | ನಮ್ಮ. | ಮೀನು. |
| ಮುದುಕ. | ಮೂಗು. | ಮಿಡಿ. |

ರಾಮನು ಮೂಕನು; ಅವನ ಅವ್ವ ಮುದುಕಿ. ಆ ಮಗು ನನ್ನ ಅಕ್ಕನ ಮುದ್ದು ಮಗು. ಅಮ್ಮಾ, ನನ್ನ ಅನ್ನ ನೀಡು. ಈ ಮೂರು ಮಾವಿನ ಮರ ನನ್ನವು.

ಮ ಮಾ ಮಿ ಮೀ ಮು ಮೂ ಮ್ಮ

| ವ ಮ |
|---|

---

**16.** ೧೬.





# ಎ ಗೆ

ಎ ಕೆ ಗೆ ವೆ ದೆ ನೆ ಲೆ

ಎರಡು. ಎದೆ. ಮನೆ. ಕೆಡು. ಎಲೆ.
ಕಾಗೆ. ಸಾಲೆ. ಇರುವೆ. ಆನೆ. ಎಲ್ಲಿ.

ಸಾಲ ಮಾಡದೆ ಇರು. ನಮಗೆ ಎರಡು ಕಾಲುಗಳು ಇವೆ. ಇರುವೆಗೆ ಆರು ಕಾಲುಗಳು ಇವೆ. ಕಾಗೆಗೆ ಗೂಡು ಇದೆ. ನಮಗೆ ಮನೆ ಇದೆ. ಎಲೆ ಅಡಕೆ ತಾ.

ಕಾಸು ಇಲ್ಲದ ನರ ಕಲ್ಲಿಗೆ ಸಮ.

---

**17.** **೧೭.**



# ಎ ಏ

ಎ (ೆ) ಕೆ ತೆ ದೆ ನೆ ಮೆ

ಏ (ೇ) ಕೇ ತೇ ದೇ ನೇ ಮೇ

ಏಡಿ. ಏನು. ತಲೆ. ಮೇಲೆ. ಎಮ್ಮೆ.

ಏಳು. ತೇಲು. ಕೇಡು. ನೆರಳು. ದೇವರು.

ಏಡಿಗಳು ನೀರಲ್ಲಿ ಇರುವುವು. ಎಮ್ಮೆ ನೀರಲ್ಲಿ ಈಸುವುದು. ಕಾಗದವು ನೀರಿನ ಮೇಲೆ ತೇಲುವುದು. ಕಲ್ಲು ನೀರಿನ ಮೇಲೆ ತೇಲುವುದೇ? ಇಲ್ಲಾ, ಅದು ಏಕೆ?

---

18. ೧೮.





# ಪ

ಪ ಪಾ ಪಿ ಪೀ ಪು ಪೂ
ಪೆ ಪೇ ಪ್ಪ

| | | |
|---|---|---|
| ದೀಪ. | ಪಾಪ. | ನೆನಪು. |
| ದಪ್ಪ. | ಪೀಪ. | ತಪ್ಪು. |
| ಉಪ್ಪು. | ಪೇರಳೆ. | ಕಪ್ಪೆ. |

ಪಾಪ ಮಾಡುವವರು ಪಾಪದ ದಾಸರು. ಪಾಪಿಗಳ ಗತಿ ನರಕ. ದೇವರ ಉಪಕಾರ ನೆನಪು ಮಾಡು. ಉಪ್ಪು ನೀರಲ್ಲಿ ಕರಗುವುದು, ತುಪ್ಪವು ನೀರಲ್ಲಿ ಕರಗುವುದೇ?

ಪಾಪದಲ್ಲಿ ತಾಪ ತಪ್ಪದು.

ಪ ಪಾ ಪಿ ಪೀ | ಪು ಪೂ ಪೆ ಪೇ ಪ್ಪ.

## 19. ೧೯.

ಂ



ಯ

ಯ ಯಾ ಯಿ ಯೀ ಯು ಯೂ

ಯೆ ಯೇ ಯೈ

ದಯ. ಯಾವಾಗ. ನಾಯಿ. ಕಾಯು.
ಅಯ್ಯಾ. ಯಾರು. ಯುಗಾದಿ. ತಾಯಿ.
ಸಾಯು. ತಂದೆ.

ನಾಯಿಯು ಮನೆ ಕಾಯುವುದು. ಕುರಿಗಳೂ ನಾಯಿಯೂ ಆಡುವುವು. ನಾಯಿಯ ಮರಿಗಳು ಕೆಲವು ದಿನ ಕುರುಡಾಗಿ ಇರುವುವು. ತಂದೆ ತಾಯಿಗಳ ಮಾತಿಗೆ ಎದುರು ಆಡದೆ ಇರು. ತಾಯಿಯೇ, ತಂದೆಯೇ, ನಾನು ನಿಮ್ಮನ್ನು ಎಂದೂ ಮರೆಯೆನು.

ಊರಿಗೆ ಅರಸನಾದರೂ ತಾಯಿಗೆ ಮಗ.

---

20. ೨೦.

ತ್ತ  ತ್ತು

ಡೆ ಡೇ ರೆ ರೇ ಸೆ ಸೇ ಳೆ ಳೇ

ಕತ್ತರಿ. ಎತ್ತು. ಕತ್ತೆ. ಆಮೆ. ಸೇದು.

ಕತ್ತಿ. ತೆಗೆ. ಪೀಡೆ. ವೇಳೆ. ಸೇರು.

ನಾನು ಈಗ ಆಡುತ್ತೇನೆ. ನೀನು ಈಗ ಆಡುತ್ತೀ. ಅವನು ಈಗ ಆಡುತ್ತಾನೆ. ಅವಳು ಈಗ ಆಡುತ್ತಾಳೆ. ಅದು ಈಗ ಆಡುತ್ತದೆ. ನಾವು ಈಗ ಆಡುತ್ತೇವೆ. ನೀವು ಈಗ ಆಡುತ್ತೀರಿ. ಅವರು ಈಗ ಆಡುತ್ತಾರೆ. ಅವು ಈಗ ಆಡುತ್ತವೆ.

ನಾನು ಆಗ ಆಡಿದೆನು. ನೀನು ಆಗ ಆಡಿದಿ. ಅವನು ಆಗ ಆಡಿದನು. ಅವಳು ಆಗ ಆಡಿದಳು. ಅದು ಆಗ ಆಡಿತು. ನಾವು ಆಗ ಆಡಿದೆವು. ನೀವು ಆಗ ಆಡಿದಿರಿ. ಅವರು ಆಗ ಆಡಿದರು. ಅವು ಆಗ ಆಡಿದುವು.

ನಾನು ಮತ್ತೆ ಆಡುವೆನು. ನೀನು ಮತ್ತೆ ಆಡುವಿ. ಅವನು ಮತ್ತೆ ಆಡುವನು. ಅವಳು ಮತ್ತೆ ಆಡುವಳು. ಅದು ಮತ್ತೆ ಆಡುವುದು. ನಾವು ಮತ್ತೆ ಆಡುವೆವು. ನೀವು ಮತ್ತೆ ಆಡುವಿರಿ. ಅವರು ಮತ್ತೆ ಆಡುವರು. ಅವು ಮತ್ತೆ ಆಡುವುವು.

ಕತ್ತೆ ಮೇದಲ್ಲಿ ಮತ್ತೆ ಮೇವಿಲ್ಲ.

21. ೨೧.





# ಒ ( ೊ ) ಓ ( ೋ )

ಕೊ ದೊ ಯೊ ರೊ ಳೊ ವೊ

ಕೋ ದೋ ಯೋ ರೋ ಳೋ ವೋ

ಒಲೆ. ಓಡು. ರೋಮ. ಓಡ.

ಕೋವಿ. ಒಂದು. ಓದು. ಕೊಡ.

ನಾನು ಆಡುತ್ತೇನೋ? ನೀನು ಆಡುತ್ತೀಯೋ?

ಅವನು ಓದುತ್ತಾನೋ? ಅವಳು ಓದುತ್ತಾಳೋ?

ಅದು ಓಡುತ್ತದೋ? ನಾವು ಆಡುತ್ತೇವೋ?

ನೀವು ಆಡುತ್ತೀರೋ? ಅವರು ಆಡುತ್ತಾರೋ?

| | | | |
|---|---|---|---|
| ಕುರಿಯು | ಕುರಿಗಳು | ಮರವು | ಮರಗಳು |
| ಕುರಿಯನ್ನು | ಕುರಿಗಳನ್ನು | ಮರವನ್ನು | ಮರಗಳನ್ನು |
| ಕುರಿಯಿಂದ | ಕುರಿಗಳಿಂದ | ಮರದಿಂದ | ಮರಗಳಿಂದ |
| ಕುರಿಗೆ | ಕುರಿಗಳಿಗೆ | ಮರಕ್ಕೆ | ಮರಗಳಿಗೆ |
| ಕುರಿಯ | ಕುರಿಗಳ | ಮರದ | ಮರಗಳ |
| ಕುರಿಯಲ್ಲಿ | ಕುರಿಗಳಲ್ಲಿ | ಮರದಲ್ಲಿ | ಮರಗಳಲ್ಲಿ |





# ಬ

ಬ ಬಾ ಬಿ ಬೀ ಬು ಬೂ
ಬೆ ಬೇ ಬೊ ಬೋ ಬ್ಬ

| |
|---|
| ಒ ಬ |

| | | | |
|---|---|---|---|
| ಬರೆ. | ಬಾಲ. | ಬೀಗ. | ಒಬ್ಬ. |
| ಬೊಕ್ಕಸ. | ಬೇಕು. | ಬೆನ್ನು. | ಬೆಕ್ಕು. |
| ಬೂದಿ. | ಬುಗರಿ. | ಬೇಡ. | ಕಬ್ಬು. |

ಈ ಬೆಕ್ಕು ನನ್ನನ್ನು ನೋಡುತ್ತಿದೆ. ಎರಡು ಕಾಲು ಊರಿ ಕೂತಿದೆ. ಬೆಕ್ಕಿಗೆ ಮೀಸೆ ಇದೆ. ಅದರ ಕಿವಿಗಳು ಗಿಡ್ಡ, ಬಾಲವು ಉದ್ದ, ರೋಮವು ನಯ, ಉಗುರು ಮೊನೆಯಾಗಿದೆ. ಬೆಕ್ಕು ಮರ ಏರ ಬಲ್ಲುದು. ಮನೆಗಳಲ್ಲಿ ಬೆಕ್ಕನ್ನು ಸಾಕುತ್ತಾರೆ. ಅದು ಇಲಿಗಳನ್ನು ಕೊಂದು ತಿನ್ನುತ್ತದೆ.

ದೇವರು ಒಬ್ಬನೇ. ಆತನು ತನ್ನ ಮಾತಿನ ಬಲದಿಂದ ಎಲ್ಲವನ್ನು ಮಾಡಿದನು. ಆದದರಿಂದ ನಾವು ದೇವರಿಗೆ ವಂದನೆ ಮಾಡ ಬೇಕು. ದೇವರ ನಾಮವನ್ನು ಸುಮ್ಮನೆ ಎತ್ತ ಬಾರದು.

ಬಂದರೆ ಮಳೆ, ಕಾದರೆ ಬಿಸಿಲು.
if it comes, it is rain; if it bides, then it is scorching.

**23.** **೨೩.**



# ಹ ಹಾ ಹಿ ಹೀ ಹು
# ಹೆ ಹೊ ಂ

| | | | |
|---|---|---|---|
| ಹಡಗ. | ಹಾಲು. | ಹುಡುಗ. | ಹೆಸರು. |
| ಹೀಗೆ. | ಹೊಸ. | ಹೋಗು. | ಹುಲಿ. |
| ಹುಳಿ. | ಹಕ್ಕಿ. | ಹಳೆ. | ಹೂವು. |

ಇದು ಹಾಯಿಹಡಗ. ಹೊಗೆಹಡಗಗಳೂ ಇವೆ. ನೀರಿನ ಮೇಲೆ ಹೋಗುವುದಕ್ಕೆ ಹಡಗ ಬೇಕು. ಹೊಳೆಗಳನ್ನು ಓಡಗಳಿಂದ ಪಾರಾಗ ಬಹುದು. ಆದರೆ ಮಹಾಸಾಗರಗಳನ್ನು ಪಾರಾಗಲಿಕ್ಕೆ ಹಡಗಗಳು ಬೇಕು.

ಆ ಹುಡುಗಿಯ ಪುಸ್ತಕ ಹಳೇದು, ನನ್ನದು ಹೊಸದು.

ಹಕ್ಕಿಗೆ ಎರಡು ರೆಕ್ಕೆಗಳೂ ಗರಿಗಳೂ ಇವೆ. ಹಕ್ಕಿಗೆ ರೆಕ್ಕೆಯೇ ಬಲ, ಮರಕ್ಕೆ ಬೇರೇ ಬಲ. ಕೋಳಿಯು ಒಂದು ಹಕ್ಕಿ. ಅದರ ಮರಿಗಳು ತತ್ತಿಗಳನ್ನು ಒಡೆದು ಹೊರಗೆ ಬರುತ್ತವೆ.

ಹನಿಗೆ ಹೆದರಿ ಹೊಳೆಗೆ ಬಿದ್ದ ಹಾಗೆ.

ಹ ಹಾ ಹಿ ಹೀ ಹು ಹೆ ಹೊ ಂ

**24.** ೨೪.





# ಟ

ಟ ಟಾ ಟಿ ಟೀ ಟು ಟೂ ಟೆ ಟೇ

ಟೊ ಟೋ ಟ್ಟ

| | | | | |
|---|---|---|---|---|
| ಆಟ. | ಕಿಟಿಕಿ. | ಪೇಟೆ. | ಊಟ. | ಎಂಟು. |
| ಹೇಂಟೆ. | ಟೋಪಿ. | ಹಿಟ್ಟು. | ಉಂಟು. | ರೊಟ್ಟಿ. |
| ಕಟ್ಟೆ. | ಕುಂಟ. | ಅಟ್ಟ. | ಕಟ್ಟು. | ತಂಟೆ. |

ತಮ್ಮಾ, ಊಟ ಮಾಡಿ ಬಾ, ನಾವು ಆ ಕಟ್ಟೆಯ ಮೇಲೆ ಬುಗರಿ ಆಡುವ. ನಾವು ಕಟ್ಟೆಯನ್ನು ಕಟ್ಟ ಬಲ್ಲೆವು, ಕಲ್ಲುಗಳನ್ನು ಮಾಡ ಬಲ್ಲೆವೋ? ಪೆಟ್ಟಿಗೆಯನ್ನು ಮಾಡ ಬಲ್ಲೆವು, ಮರವನ್ನು ಮಾಡ ಬಲ್ಲೆವೋ? ಇಲ್ಲಾ. ದೇವರು ಎಲ್ಲವನ್ನು ಉಂಟು ಮಾಡ ಬಲ್ಲನು.

ಹುಡುಗರು ಹಟ ಮಾಡ ಬಾರದು. ಕಾಲು ಬಾರದವನು ಕುಂಟ. ಕುಂಟರಿಗೆ ತಂಟೆ ಮಾಡ ಬಾರದು. ದಡ್ಡ ಹುಡುಗರಿಗೆ ಪೆಟ್ಟು ಬೀಳುವದು.

ಉಂಟು ಮಾಡಿದ ದೇವರು ಊಟವ ಕೊಡಲಾರನೇ?

**25.** **೨೫.**



ತೊ ತೋ ಸೊ ಸೋ
ಗೊ ಗೋ ಮೊ ಮೋ
ಲೊ ಲೋ ಡೊ ಡೋ

ಅಗೋ, ಇಲ್ಲಿ ಮೂರು ಮೊಲಗಳು ಇವೆ. ಇವು ಮೊಲಗಳೋ? ಬೆಕ್ಕುಗಳೋ? ಇವು ಮೊಲಗಳು. ಅವುಗಳ ಕಿವಿ ನೋಡು, ನೆಟ್ಟಗೆ ನಿಲ್ಲುತ್ತವೆ. ಈ ಮೊಲಗಳು ಓಡುತ್ತವೋ? ಕೂತಿವೆಯೋ? ಒಂದು ಮೊಲವು ಓಡುತ್ತಿದೆ.

ನನ್ನ ಮಾವನಿಗೆ ಒಂದು ತೋಟ ಇದೆ. ಅದರೊಳಗೆ ಮಾವಿನ ಮರ, ಹಲಸಿನ ಮರ, ಅತ್ತೀಮರ, ಪೇರಳೇಗಿಡ, ಗೋಳೀಮರ ಮುಂತಾದ ಮರಗಳು ಇವೆ. ಮಲ್ಲಿಗೆ ಹೂವುಗಳೂ ಗುಲಾಬಿ ಹೂವುಗಳೂ ಇವೆ. ಈ ಹೂವುಗಳ ಪರಿಮಳವು ಸವಿಯಾಗಿದೆ.

ತೋಟ ಸಿಂಗಾರ; ಒಳಗೆ ಗೋಳೀ ಸೊಪ್ಪು.

**26.** ೨೬.



# ಎ (ೆ) ಏ (ೇ) ಐ (ೈ)

## ಕೆ ಕೇ ಕೈ ರೈ ಮೈ ಪೈ ವೈ

ಐದು. ಕೈ. ಒನಕೆ. ರೈತ. ಮೈಗಳ.
ಐಗಳು. ರೋಗ. ವೈರಿ. ಪೈಸೆ. ಪೈರು.

ನಮಗೆ ಎರಡು ಕೈಗಳು ಇವೆ. ಒಂದು ಬಲಕೈ, ಮತ್ತೊಂದು ಎಡಕೈ. ಒಂದು ಪೈಸೆಗೆ ನಾಲ್ಕು ಪೈ.

ಕೈಯಲ್ಲಿ ಗುದ್ದಲಿಯನ್ನು ಹಿಡಿದು ನೆಲವನ್ನು ಅಗಿಯ ಬಹುದು; ನೇಗಿಲನ್ನು ಹಿಡಿದು ಗದ್ದೆಯನ್ನು ಹೂಡ ಬಹುದು; ಕುಡುಗೋಲನ್ನು ಹಿಡಿದು ಪೈರನ್ನು ಕೊಯ್ಯ ಬಹುದು; ಒನಕೆ ಯನ್ನು ಹಿಡಿದು ಅಕ್ಕಿಯನ್ನು ಕುಟ್ಟ ಬಹುದು; ಮೊರವನ್ನು ಹಿಡಿದು ಬತ್ತವನ್ನು ಕೇರ ಬಹುದು; ಕತ್ತರಿಯನ್ನು ಹಿಡಿದು ಕತ್ತ ರಿಸ ಬಹುದು.

---

**27.** ೨೭.




# ಣ

ಣ ಣಾ ಣಿ ಣೀ ಣು ಣೂ ಣೆ ಣೇ

ಣೈ ಣೊ ಣೋ ಣ್ಣ

ಕೋಣ. ಆಣೆ. ಅಣ್ಣ. ಬೆಣ್ಣೆ. ಕಣ್ಣು.

ಗೋಣಿ. ಗೇಣು. ಬಣ್ಣ. ತಣ್ಣೀರು. ಹಣ್ಣು.

ತರತರದ ಹಣ್ಣುಗಳು ಇವೆ. ಬಾಳೆಯ ಹಣ್ಣು, ಮಾವಿನ ಹಣ್ಣು, ಹಲಸಿನ ಹಣ್ಣು, ಕಿತ್ತಲೆಯ ಹಣ್ಣು, ಪೇರಳೆಯ ಹಣ್ಣು. ಈ ಹಣ್ಣುಗಳು ಬಹಳ ಸವಿಯಾಗಿವೆ. ಅವುಗಳನ್ನು ತಿಂದು ಆನಂದ ಪಡುತ್ತೇವೆ. ಅವುಗಳನ್ನು ನಮಗೆ ಕೊಟ್ಟವನು ಯಾರು? ದೇವರು. ನಾವು ಅವುಗಳನ್ನು ತಿನ್ನುವಾಗ ದೇವರ ಉಪಕಾರವನ್ನು ನೆನಸ ಬೇಕು; ಆತನನ್ನು ಹೊಗಳ ಬೇಕು.

ಹಣ ಕಂಡರೆ ಹೆಣ ಬಾಯಿ ಬಿಡುವದು.

**28.** **೨೮.**





ಚ ಚಾ ಚಿ ಚೀ ಚು ಚೂ
ಚೆ ಚೇ ಚೈ ಚೊ ಚೋ ಚ್ಚ | ಒ ಬ ಚ |

ಚೂರಿ. ಚಕ್ಕುಲಿ. ಚಾಪೆ. ಚಿಕ್ಕ. ಚೆಂಡು.
ಚಬುಕು. ಚೀಲ. ಚೋರ. ಕಚ್ಚು. ಚೇಳು.

ಚೂರಿ ಹದವಾದರೂ ಗಿಡ ಕಡಿಯಲಾರದು.

---

**29.** **೨೯.**





ಜ ಜಾ ಜಿ ಜೀ ಜು ಜೂ
ಜೆ ಜೇ ಜೈ ಜೊ ಜೋ ಜ್ಜ | ಒ ಒ ಜ |

ಜಾಡ. ಮೇಜು. ಜೇನು. ಜೋಳ. ಅಜ್ಜಿ.
ಜೀರಿಗೆ. ಜೂಜು. ಪೂಜೆ. ಜೈನ. ಮುತ್ತಜ್ಜಿ.

---

30. ೩೦.



ಞ

ಞ ಞಾ

ಹುಂಜ. ಗಂಜಿ. ಮುಂಜಾನೆ. ಜ್ಞಾನ.
ಪಂಜರ. ನಂಜು. ಗೊಂಚಲು. ಜ್ಞಾಪಕ.

ಈ ಹುಂಜನನ್ನು ನೋಡು. ಅದು ಬಹಳ ಚಂದವಾಗಿದೆ. ಅದರ ತಲೆಯಲ್ಲಿ ಜುಟ್ಟು ಇದೆ. ಬಾಲದ ಗರಿಗಳು ಉದ್ದವಾಗಿದೆ. ಹುಂಜವು ಬೆಳಿಗಿನ ಜಾಮುವನ್ನು ತಿಳಿಯುತ್ತದೆ. ಅದು ಮುಂಜಾನೆ ಕೊ ಕೊ ಕೋಕೋ ಎಂದು ಕೂಗುವುದು. ಆಗ ಜನರು ಎದ್ದು ತಮ್ಮ ತಮ್ಮ ಜಂಬರಗಳಿಗೆ ಹೋಗುವರು.

31. ೩೧.



ರ್ = ರ್ ನ್ ಸ್ ಲ್

ಕುರ್ಚಿ. ಗರ್ವ. ಮಾರ್ಗ. ಸೂರ್ಯ.
ವರ್ಗ. ಕಾರ್ಯ. ಪೂರ್ವ. ಸರ್ಪ.

---

32. ೩೨.



ಕ್ರ ಗ್ರ ತ್ರ ದ್ರ ಪ್ರ ವ್ರ ಸ್ರ

ಚಕ್ರ. ಕ್ರಯ. ಗ್ರಾಮ. ಚಿತ್ರ. ಚಂದ್ರ.
ರಾತ್ರಿ. ವಿದ್ಯ. ಪ್ರಾಯ. ಪ್ರೀತಿ. ಸ್ವಾಮಿ.

ದೇವರು ಪ್ರೀತಿಯಾಗಿದ್ದಾನೆ.

---



# ಙ

ಙ ಙಿ ಙೆ

ಮಗ. ಮಂಗ. ಸುಂಕ. ಅಂಗೈ. ತಿಂಗಳು.
ತೆಂಗು. ಸಂಕ. ಅಂಗಡಿ. ಅಂಗಿ. ಮುಂಗೈ.

ಅಗೋ, ಬೀದಿಯಲ್ಲಿ ಒಬ್ಬನು ಮಂಗನನ್ನು ಆಡಿಸುತ್ತಾನೆ. ಅದರ ಸೊಂಟಕ್ಕೆ ಹಗ್ಗ ಹಾಕಿದ್ದಾನೆ. ಮಂಗನಿಗೆ ಕುಣಿಯುವುದಕ್ಕೆ ಬರುತ್ತದೆ. ಅದು ಕುಣಿಯುವುದನ್ನು ನೋಡುವಾಗ ನನಗೆ ನಗೆ ಬರುತ್ತದೆ. ಒಮ್ಮೆ ಹಲ್ಲು ಕಿರಿದು ಅಣಕಿಸುವುದು, ಒಮ್ಮೆ ಹುಬ್ಬನ್ನು ಹಾರಿಸುವುದು. ಅದರ ಪಾದಗಳು ಕೈಗಳ ಹಾಗಿವೆ. ಕೋತಿಗಳಲ್ಲಿ ಅನೇಕ ಜಾತಿ ಉಂಟು. ಬಾಲವಿಲ್ಲದ ಕೋತಿಗಳುಂಟು; ಕೆಲವಕ್ಕೆ ಉದ್ದವಾದ ಬಾಲ ಉಂಟು; ಕೆಲವಕ್ಕೆ ಮೊಂಡ ಬಾಲ ಉಂಟು. ಒಂದು ಜಾತಿಯು ಚಿಕ್ಕದು; ಇನ್ನೊಂದು ಜಾತಿಯು ದೊಡ್ಡದು.

ಅಂಗಿ ಕೊಟ್ಟು ಬಂಗಿ ಸೇದಿ ಮಂಗನಾದ.



ಪ ಷ

# ಷ ಷಾ ಷಿ ಷು ಷೆ ಷೊ ಕ್ಷ

ಸಂತೋಷ. ಕಷ್ಟ. ಅಷ್ಟು. ಅಕ್ಷರ.
ವರುಷ. ಮನುಷ್ಯ. ಇಷ್ಟು. ಪುಷ್ಪ.

ಬಟ್ಟೆ ನೇಯುವವನು ಜಾಡನು. ಬಟ್ಟೆ ಹೊಲಿಯುವವನು ಚಿಂಪಿಗನು. ಬಟ್ಟೆ ಮಡಿ ಮಾಡುವವನು ಅಗಸನು. ಕೊಜೆ ಮಣ್ಣಿನಿಂದ ಮಡಿಕೆ ಮಾಡುವವನು ಕುಂಬಾರನು. ಕಬ್ಬಿಣದ ಕೆಲಸ ಮಾಡುವವನು ಕಮ್ಮಾರನು. ಚರ್ಮದಿಂದ ಮೊಚ್ಚೆ ಮಾಡುವವನು ಚಮ್ಮಗಾರನು. ತಾಮ್ರದ ಕೆಲಸ ಮಾಡುವವನು ಚಂಬುಕುಟಿಗನು. ಕಲ್ಲು ಕಡಿಯುವವನು ಕಲ್ಲುಕುಟಿಗನು. ಮರದ ಕೆಲಸ ಮಾಡುವವನು ಬಡಿಗಿಯು. ಗಾಣ ಹಾಕಿ ಎಣ್ಣೆ ತೆಗೆಯುವವನು ಗಾಣಿಗನು. ಗದ್ದೆ ಹೊಲಗಳಲ್ಲಿ ಪೈರು ಬೆಳಿಸುವವನು ಬೇಸಾಯಗಾರನು. ರಾಜ್ಯ ಆಳುವವನೇ ಅರಸನು.

ಕುಂಬಾರಗೆ ವರುಷ ಡೊಣ್ಣೆಗೆ ನಿಮಿಷ.

35. ೩೫.




ಒ (ೊ) ಓ (ೋ) ಔ (ೌ)

ಕೊ ಕೋ ಕೌ. ಗೊ ಗೋ ಗೌ.

ತೌ ದೌ ವೌ ಯೌ ಸೌ ಹೌ.

ಔದಾರ್ಯ. ಕೌಶಲ. ಗೌಳಿ. ಹೌದು.

ಔಚಿತ್ಯ. ಯೌವನ. ಮೌನ. ಗೌರವ.

ತಾಯಿ ತಂದೆಗಳ ಮಾತು ಕೇಳು. ಬಡವರ ಮೇಲೆ ದಯೆ ಇಡು. ಹಸಿದವನಿಗೆ ಅನ್ನವನ್ನು ನೀಡು. ಚಾಡಿ ಮಾತು ಹೇಳ ಬೇಡ. ಕನಸಿನಲ್ಲಿಯೂ ಸುಳ್ಳಾಡ ಬೇಡ. ಪರರನ್ನು ನಿಂದಿಸ ಬಾರದು. ಪರರ ಸೊತ್ತಿಗೆ ಬಯಸ ಬೇಡ.

ವಿದ್ಯೆ ಹೇಳಿದವರನ್ನು ಮರೆಯ ಬೇಡ. ಉಂಡ ಮನೆಗೆ ಎರಡು ಬಗೆಯ ಬೇಡ. ಉಂಟಾದ್ದು ಇಲ್ಲವೆಂದು ಹೇಳ ಬೇಡ. ಮಾತಿಗೆ ತಪ್ಪ ಬೇಡ. ಮಾಡಿದ ಉಪಕಾರವನ್ನು ಮರೆಯ ಬೇಡ. ಎಲ್ಲರಿಗೆ ಉಪಕಾರವನ್ನು ಮಾಡು.



# ಶ ಶಿ ಶು ಶೆ ಶೈ ಶೊ ಶೌ

# ಶ್ಶ ಸ್ಲ

| | | | |
|---|---|---|---|
| ಶರೀರ. | ಶಿಶು. | ಶುಚಿ. | ಆಶೆ. |
| ಶೈವ. | ಮನಸ್ಸು. | ಆಕಾಶ. | ಶಾಂತ. |
| ಶೂರ. | ಶೋಕ. | ಶೌರ್ಯ. | ನಿಶ್ಯಕ್ತಿ. |

ಒಳ್ಳೇ ಜನರ ಸಹವಾಸದಿಂದ ಮನಸ್ಸು ಶಾಂತವಾಗುವುದು. ಪರರ ಒಡವೆಗಳನ್ನು ಆಶಿಸ ಬೇಡ. ಕೆಟ್ಟ ಆಶೆಯು ಪಾಪವಾಗಿದೆ. ದೇವರು ನಮ್ಮ ಮನಸ್ಸಿನ ಆಲೋಚನೆಗಳನ್ನು ತಿಳಿಯುತ್ತಾನೆ. ಮಕ್ಕಳು ಯಾವಾಗಲೂ ಶುಚಿಯಾಗಿರ ಬೇಕು. ಶುಚಿಯಾಗಿ ಇರದಿದ್ದರೆ, ರೋಗವು ಬರುವುದು. ರೋಗವು ಶೋಕಕ್ಕೆ ಕಾರಣವಾಗುವುದು.

ಆಶೆಗೆ ನಾಶವಿಲ್ಲ.

---

37. ೩೭.



# ಋ (ೃ ೄ)

ಕೃ ಗೃ ತೃ ದೃ ಮೃ ಹೃ ಸೃ ಶೃ

ಋತು. ಕೃಪೆ. ಗೃಹ. ದೃಷ್ಟಿ. ವೃತ್ತಿ.
ಮೃಗ. ಹೃದಯ. ಸೃಷ್ಟಿ. ತೃಪ್ತಿ. ಶೃಂಗ.

ಎತ್ತು, ದನ, ಎಮ್ಮೆ, ಕೋಣ, ಕುದುರೆ, ನಾಯಿ, ಕುರಿ, ಆಡು, ಇವುಗಳು ನಾಡುಮೃಗಗಳು. ಈ ಮೃಗಗಳಿಂದ ನಮಗೆ ಬಹಳ ಪ್ರಯೋಜನ ಉಂಟು. ಎತ್ತುಗಳೂ ಕುದುರೆಗಳೂ ಬಂಡಿ ಎಳೆಯುತ್ತವೆ. ಕೋಣಗಳೂ ಎತ್ತುಗಳೂ ಗದ್ದೆ ಉಳುತ್ತವೆ. ಆಡು, ದನ, ಎಮ್ಮೆಗಳು ಹಾಲು ಕೊಡುತ್ತವೆ. ಆದದರಿಂದ ನಾವು ಅವುಗಳ ಮೇಲೆ ಕೃಪೆಯುಳ್ಳವರು ಆಗಿರ ಬೇಕು.

38. ೨೮.

ಟ ಠ ಡ ಢ ಣ | ರ ಠ

ಠ ಠಾ ಠಿ ಠು ಠೆ ಠೊ ಟ್ಠ ಡ್ಢ ಷ್ಠ

ಪಠ. ಪಾಠ. ಕಠೋರ. ಮೂಢ. ಮಠ.
ದೃಢ. ಕಠಿಣ. ವಿಟ್ಠಲ. ಗರ್ವಿಷ್ಠ. ಕಠಾರಿ.

ಒಬ್ಬನಿಗೆ ಹೆಡ್ಡ ಚಾಕರನಿದ್ದನು. ಅವನು ಒಂದು ದಿನ ಎಣ್ಣೆ ತರುವುದಕ್ಕೆ ಅಂಗಡಿಗೆ ಹೋದನು. ಹಣ ಕೊಟ್ಟು ಗಿಂಡಿಯಲ್ಲಿ ಎಣ್ಣೆ ತುಂಬಿಸಿಕೊಂಡು—ಈಗ ಕುಸರಿ ಕೊಡಯ್ಯಾ, ಅಂದನು. ಕುಸರಿಗೆ ಜಾಗ ಎಲ್ಲಿಯೋ? ಎಂತ ಅಂಗಡಿ ಗಾರನು ಕೇಳಿದನು. ಅವನು—ಇಗೋ, ಇಲ್ಲಿ ಹಾಕು ಎಂತ ಗಿಂಡಿಯ ಅಡಿಯನ್ನು ತೋರಿಸಿದನು; ಆಗ ಗಿಂಡಿಯಲ್ಲಿದ್ದ ಎಣ್ಣೆ ಎಲ್ಲಾ ಅಂಗಡಿಯವನ ಮರಿಗೆಗೆ ಚೆಲ್ಲಿ ಹೋಯಿತು. ಅಂಗಡಿ ಗಾರನು ನಕ್ಕು, ಗಿಂಡಿಯ ಅಡಿಯಲ್ಲಿ ಎಣ್ಣೆ ತುಂಬಿಸಿ, ಕಳುಹಿಸಿ ದನು. ಹೆಡ್ಡನು ಮನೆಗೆ ಬರಲು, ಯಜಮಾನನು—ದುಡ್ಡಿಗೆ ಇಷ್ಟೇ ಎಣ್ಣೆಯೋ? ಅಂದನು. ಹೆಡ್ಡನು ಅಡಿ ಮಗಚಿ—ಅಗೋ, ಇಲ್ಲಿ ತುಂಬ ಇದೆ, ಅಂದನು. ಆಗ ಅಡಿಯಲ್ಲಿದ್ದ ಎಣ್ಣೆಯೂ ನೆಲದಲ್ಲಿ ಚೆಲ್ಲಿ ಹೋಯಿತು. ಮಕ್ಕಳೇ, ಹೆಡ್ಡನು ದುಡ್ಡಿಗೆ ಎಷ್ಟು ಎಣ್ಣೆ ತಂದನು?

ಪಾಠ ಬಾರದಿದ್ದರೂ ಆಟ ಬರುತ್ತದೆ.

**39.** **೩೯.**



# ತ ಥ ದ ಧ ನ

# ಧಿ ಧು ಥೆ ಧೃ ಧೊ ಸ್ಥ ದ್ಧ

| | | | |
|---|---|---|---|
| ರಥ. | ಬಂಧು. | ಧೈರ್ಯ. | ಶುದ್ಧ. |
| ಎಂಥಾ. | ವಿಧೇಯ. | ಧಾನ್ಯ. | ಬುದ್ಧಿ. |
| ಕಥೆ. | ಸ್ಥಳ. | ಅರ್ಥ. | ಅಂಥಾ. |

ಹುಡುಗರೇ! ನಾನು ಹೇಳುವ ಮಾತಿಗೆ ಕಿವಿ ಕೊಡಿರಿ. ತಕ್ಕ ಹೊತ್ತಿಗೆ ಸಾಲೆಗೆ ಬನ್ನಿರಿ. ಸಾಲೆಗೆ ಬರುವಾಗ ಕೈ ಮೋರೆ ತೊಳೆದುಕೊಂಡು ಬನ್ನಿರಿ. ಸಾಲೆಗೆ ಬಂದ ಕೂಡಲೇ ಐಗಳರಿಗೆ ಸಲಾಂ ಮಾಡಿರಿ. ತರುವಾಯ ಏನೂ ಮಾತಾಡದೆ ಕಲಿಯಿರಿ. ಮೈಗಳ್ಳರಾಗಿ ಹೊತ್ತು ಕಳೆಯ ಬಾರದು.

---

40. ೪೦.



ಪ ಫ ಬ ಭ ಮ

ಭ ಭಿ ಭು ಭೈ ಭೊ ಫೆ ಬ್ಭ

ಬ ಭ

ಫಲ. ಭಾಗ್ಯ. ಭೇದ. ಭೋಗ. ಭಕ್ತಿ.
ಭೂತ. ಲಾಭ. ಭೂಮಿ. ಭಯ. ಭಿಕ್ಷೆ.

ಬಂಗಾರ, ಬೆಳ್ಳಿ, ತಾಮ್ರ, ಸೀಸ, ಕಬ್ಬಿಣ, ಇವು ಪಂಚ ಲೋಹಗಳು; ಇವುಗಳಲ್ಲಿ ಬಂಗಾರವೇ ಹೆಚ್ಚಿನದು. ಬಂಗಾರಕ್ಕಿಂತ ಜ್ಞಾನವು ಹೆಚ್ಚಿನದು, ಜ್ಞಾನಕ್ಕಿಂತಲೂ ಭಕ್ತಿಯು ಹೆಚ್ಚಿನದು.

ಭೂತಗಳನ್ನು ಆರಾಧಿಸುವುದು ದೇವಭಕ್ತಿಗೆ ವಿರೋಧ. ನಿರ್ಮಲಚಿತ್ತರು ಧನ್ಯರು; ಅವರು ದೇವರನ್ನು ನೋಡುವರು. ಮುಂಜಾನೆ ಎದ್ದು ದೇವರ ಧ್ಯಾನ ಮಾಡಿ, ನಿಮ್ಮ ಪಾಠಗಳನ್ನು ಕಲಿಯಿರಿ; ಇಂಥಾ ನಡತೆಯಿಂದ ನಿಮಗೆ ಮಹಾ ಲಾಭ ಆಗುವುದು.

ದೇವರ ಭಯವೇ ಜ್ಞಾನದ ಆರಂಭ.

41. ೪೧.



# ಕ ಖ ಖಿ ಖು ಖೆ ಖ್ಖ | ಖ ಱ

ಶಂಖ. ಸುಖ. ದುಃಖ. ಸೌಖ್ಯ.

ಖಡ್ಗ. ಖೂನಿ. ಮೂರ್ಖ. ವ್ಯರ್ಥ.

ಒಂದು ಊರಲ್ಲಿ ಇಬ್ಬರು ಹುಡುಗರು ಇದ್ದರು. ಒಬ್ಬನ ಹೆಸರು ಚನ್ನಪ್ಪನು, ಇನ್ನೊಬ್ಬನ ಹೆಸರು ಬಸಪ್ಪನು. ಇವರಿಬ್ಬರು ಒಂದು ದಿನ ಒಂದು ಮಾವಿನ ತೋಟಕ್ಕೆ ಹೋದರು. ಅಲ್ಲಿ ಒಂದು ಮರದ ಮೇಲೆ ಮಾವಿನ ಹಣ್ಣುಗಳನ್ನು ನೋಡಿ, ಅವರಿಗೆ ಬಾಯಲ್ಲಿ ನೀರು ಊರಿತು. ಚನ್ನಪ್ಪನು ಅತ್ತ ಇತ್ತ ನೋಡಿ— ಬಸಪ್ಪಾ, ಇಲ್ಲಿ ಯಾರೂ ಇಲ್ಲ; ನಾವು ಕೆಲವು ಹಣ್ಣುಗಳನ್ನು ಕಿತ್ತುಕೊಳ್ಳೋಣ, ಅಂದನು. ಆಗ ಬಸಪ್ಪನು—ಚನ್ನಪ್ಪಾ, ಇಲ್ಲಿ ಯಾರೂ ಇಲ್ಲ ಸರಿ, ಆದರೆ ನೀನು ಮೇಲಕ್ಕೆನೋಡಲಿಲ್ಲ; ಮೇಲೆ ದೇವರು ಇದ್ದಾನೆ, ಆತನು ನಮ್ಮನ್ನು ನೋಡುತ್ತಾನೆ, ಅಂದನು. ಆಗ ಚನ್ನಪ್ಪನು ನಾಚಿಕೆ ಪಟ್ಟನು. ಬಳಿಕ ಕದಿಯದೆ ಇಬ್ಬರೂ ಮನೆಗೆ ನಡೆದರು.

---

42. ೪೨.



ಘ ಘ

ಕ ಖ ಗ ಘ ಙ

ಘ ಘಾ ಘಿ ಘು ಘೃ ಘೆ ಘೊ ಘ್

ಘಂಟೆ. ಘಾತಕ. ಘೋರ. ಘನ. ಗಾಳಿ.
ಜ್ಞಾನ. ಘೃತ. ಮೇಘ. ಸಂಘ. ಗಟ್ಟಿ.

ತರತರದ ಬಣ್ಣಗಳು ಇವೆ. ಕಾಗೆಯ ಬಣ್ಣವು ಬೇರೆ; ಹಾಲಿನ ಬಣ್ಣವು ಬೇರೆ; ಹುಲ್ಲಿನ ಬಣ್ಣವು ಬೇರೆ; ಆಕಾಶದ ಬಣ್ಣವು ಬೇರೆ; ಅರಸಿನದ ಬಣ್ಣವು ಬೇರೆ; ಕುಂಕುಮದ ಬಣ್ಣವು ಬೇರೆ. ಕಾಗೆಯ ಬಣ್ಣವು ಎಂಥಾದ್ದು? ಕಾಗೆಯ ಬಣ್ಣ ಕಪ್ಪು; ಹಾಲಿನ ಬಣ್ಣ ಬಿಳುಪು; ಹುಲ್ಲಿನ ಬಣ್ಣ ಹಸುರು; ನೀಲಿಯ ಬಣ್ಣ ನೀಲ; ಅರಸಿನದ ಬಣ್ಣ ಹಳದಿ; ಕುಂಕುಮದ ಬಣ್ಣ ಕೆಂಪು. ಹಸುರು ಬಣ್ಣವು ಕಣ್ಣಿಗೆ ಸುಖಕರ. ಕೆಂಪು, ಹಳದಿ, ನೀಲ, ಇವು ಮೂರು ಮುಖ್ಯ ಬಣ್ಣಗಳು. ರಾಳದ ಬಣ್ಣವು ಎಂಥಾದ್ದು? ಮಲ್ಲಿಗೆಯ ಹೂವಿಗೆ ಯಾವ ಬಣ್ಣವಿದೆ, ಹೇಳು.

---

43. ೪೩.



ಠ ಛ ಛಿ ಛು ಛೆ ಛ | ಪ ಛ |

ಛಲ. ಛತ್ರ. ಛಾಯೆ. ಛಿನ್ನ.
ಛಂದಸ್ಸು. ಛಿದ್ರ. ಛೇದ. ಇಚ್ಛೆ.

ಒಂದು ಊರಲ್ಲಿ ಕೆಲವು ಕುರುಡರು ಇದ್ದರು. ಒಂದಾನೊಂದು ದಿನ ಒಂದು ಆನೆಯು ಅಲ್ಲಿಗೆ ಬಂತು. ಆನೆ ಬಂದಿದೆ ಎಂತ ಎಲ್ಲರೂ ನೋಡುವುದಕ್ಕೆ ಹೋದರು. ಆಗ ಈ ಕುರುಡರೂ ಅಲ್ಲಿಗೆ ಹೋಗಿ ಆನೆ ಹ್ಯಾಗೆ ಇದೆ ಎಂತ ಮುಟ್ಟಿ ಪರೀಕ್ಷೆ ಮಾಡಿದರು. ಕಾಲು ಹಿಡಿದವನು, ಅದು ಕಂಬದ ಹಾಗೆ, ಅಂದನು; ಸೊಂಡಿಲು ಹಿಡಿದವನು, ಅದು ಬಾಳೆಯಂತೆ ಇದೆ, ಅಂದನು; ಕಿವಿ ಮುಟ್ಟಿದವನು, ಅದು ಬೀಸಣಿಗೆಯ ಹಾಗೆ ಇದೆ, ಅಂದನು; ಬಾಲ ಹಿಡಿದವನು, ಅದು ಒನಕೆಯಂತೆ ಇದೆ, ಅಂದನು; ಮತ್ತು ನಾನು ಹೇಳುವದು ಸಮ, ನಾನು ಹೇಳುವದು ಸಮ ಎಂತ ಜಗಳಾಡಿದರು. ಆಗ ಆನೆಯ ಮಾವತನು — ನೀವೆಲ್ಲರೂ ಹೇಳಿದ್ದು ಸಮ, ನೀವೆಲ್ಲರೂ ಹೇಳಿದ್ದು ತಪ್ಪು ಎಂತ ಹೇಳಿದನು. ಮಕ್ಕಳೇ, ಅದು ಹ್ಯಾಗೆ?

ಆನೆ ಕಂಡು ಶ್ವಾನ ಬೊಗಳಿದ ಹಾಗೆ.

---

ಝ

ಯ ಝ

ಚ ಛ ಜ ಝ ಞ

ಝ ಝಾ ಝಿ ಝೆ ಝು

ಝುಳಪಿಸು. ಜ್ಞಾನಿ. ಸ್ವೇಚ್ಛೆ. ರೇಶ್ಮೆ.
ಝೇಂಕರಿಸು. ಜ್ಞಾಪಕ. ರತ್ನ. ಜ್ವರ.

ಸಿಪಾಯಿಯು ಖಡ್ಗವನ್ನು ಝುಳಪಿಸುತ್ತಾನೆ. ಜೇನುನೊಣಗಳು ಝೇಂಕರಿಸುತ್ತವೆ. ಘನವಂತರು ಜಗಳವಾಡರು; ಹಾಗೂ ಸ್ವೇಚ್ಛೆಯಿಂದ ಜಗಳ ಹತ್ತಿಸರು.

ಒಂದು ವಾರಕ್ಕೆ ಏಳು ದಿನ. ಆದಿತ್ಯವಾರವು ವಾರದ ಮೊದಲನೇ ದಿನ. ಈ ದಿವಸದಲ್ಲಿ ನಮಗೆ ಸಾಲೆ ಇಲ್ಲ. ಆ ಮೇಲೆ ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ, ಶನಿವಾರ. ಈ ಆರು ದಿವಸಗಳಲ್ಲಿ ನಮ್ಮ ಕೆಲಸಗಳನ್ನು ಮನಸಿಟ್ಟು ಮಾಡ ಬೇಕು. ಮಾರಣೇ ದಿನ ಆದಿತ್ಯವಾರ ತಿರಿಗಿ ಬರುತ್ತದೆ. ಆಗ ನಮ್ಮ ಕೆಲಸವನ್ನು ಬಿಟ್ಟು ವಿಶ್ರಾಂತಿ ಪಡುತ್ತೇವೆ. ದೇವರು ಆರು ದಿವಸಗಳಲ್ಲಿ ಆಕಾಶವನ್ನೂ ಭೂಮಿಯನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಎಲ್ಲವುಗಳನ್ನೂ ಉಂಟು ಮಾಡಿದನು. ಮತ್ತು ಏಳನೇ ದಿವಸದಲ್ಲಿ ವಿಶ್ರಮಿಸಿಕೊಂಡನು. ಆದದರಿಂದ ಏಳನೇ ದಿವಸವನ್ನು ಆಶೀರ್ವದಿಸಿ ಪರಿಶುದ್ಧ ಮಾಡಿದನು.

ಜ್ಞಾನವಂತಗೆ ಸ್ನಾನ ಯಾಕೆ?

45. ೪೫.



# ಅಂ ಅಃ

ಹಂಸ. ಸಂಶಯ. ಮಾಂಸ. ಪ್ರಾತಃಕಾಲ.
ಸಿಂಹ. ಹಿಂಸೆ. ಸಂಸಾರ. ಅಂತಃಕರಣ.

ಹಂಸವು ನೋಡುವುದಕ್ಕೆ ದೊಡ್ಡ ಬಾತಿನಂತೆ ಇದೆ. ಆದರೆ ಅದಕ್ಕಿಂತ ಬಹಳ ಚೆಲುವಾದ ಪಕ್ಷಿ ಆಗಿದೆ.

ಮೈಗಳ್ಳನೇ, ಇರುವೆಯ ಹತ್ತಿರ ಹೋಗಿ, ಅದರ ನಡತೆಗಳನ್ನು ನೋಡಿ, ಜ್ಞಾನಿಯಾಗು. ಅದಕ್ಕೆ ಅಧಿಕಾರಿಯೂ ಪಾರುಪತ್ಯಗಾರನೂ ದೊರೆಯೂ ಇಲ್ಲ. ಅದು ಬೇಸಿಗೆಯ ಕಾಲದಲ್ಲಿ ತನ್ನ ರೊಟ್ಟಿಯನ್ನು ಸಿದ್ಧ ಮಾಡುತ್ತದೆ. ಸುಗ್ಗೀ ಕಾಲದಲ್ಲಿ ತನ್ನ ಆಹಾರವನ್ನು ಕೂಡಿಸುತ್ತದೆ. ಮೈಗಳ್ಳನೇ, ಎಷ್ಟು ವರೆಗೆ ಮಲಗುವಿ? ಯಾವಾಗ ನಿನ್ನ ನಿದ್ದೆ ತಿಳಿದು ಏಳುವಿ?

46. ೪೬.

# ತ್ಸ ಸ್ಮ್ರ ಗ್ನಿ ಕ್ಲ ಶ್ಚ ಸ್ತ್ರ

ವಸ್ತು. ಲಕ್ಷ. ವಿಸ್ಮಯ. ಕೃತ್ಯ.
ಬ್ರಾಹ್ಮಣ.* ವಸ್ತ್ರ. ಲಕ್ಷ್ಯ. ಶಾಸ್ತ್ರ.
ಮತ್ಸರ. ಸಂಸ್ಕೃತ. ಮಧ್ಯಾಹ್ನ.* ಸ್ತ್ರೀ.
ಮತ್ಸ್ಯ. ಲಕ್ಷ್ಮಿ. ನಿಷ್ಕಪಟ. ನಿಶ್ಚಯ.
ನಿಷ್ಫಲ. ತದ್ಭವ. ಸ್ವಪ್ನ. ಆಶ್ಚರ್ಯ.

ದೇವರು ನನಗೆ ಜೀವವನ್ನು ಕೊಟ್ಟಿದ್ದಾನೆ. ದಿನದಿನಕ್ಕೆ ದೇವರು ನನಗೆ ಆಹಾರವನ್ನು ದಯಪಾಲಿಸುತ್ತಾನೆ. ಆತನು ನನಗೆ ತಂದೆತಾಯಿಗಳನ್ನೂ ದಯವುಳ್ಳ ಸ್ನೇಹಿತರನ್ನೂ ಕೊಟ್ಟಿದ್ದಾನೆ. ನನಗೆ ಇರುವುದೆಲ್ಲಾ ದೇವರೇ ಕೊಟ್ಟದ್ದು ಆಗಿದೆ.

ನಾನು ದೇವರನ್ನು ನೋಡಲಾರೆನು; ಆದರೆ ಆತನು ನನ್ನನ್ನು ರಾತ್ರಿ ಹಗಲು ನೋಡುತ್ತಾನೆ. ನನ್ನ ಎಲ್ಲಾ ಮಾತುಗಳನ್ನು ದೇವರು ಕೇಳುತ್ತಾನೆ. ನನ್ನ ಆಲೋಚನೆಗಳನ್ನು ಆತನು ತಿಳಿಯುತ್ತಾನೆ. ನಾನು ದೇವರನ್ನು ನನ್ನ ಪೂರ್ಣ ಹೃದಯದಿಂದ ಪ್ರೀತಿ ಮಾಡ ತಕ್ಕದ್ದು.

ದೇವರೇ, ನಿನ್ನ ಚಿತ್ತವನ್ನು ಮಾಡುವುದಕ್ಕೆ ನನಗೆ ಕಲಿಸು.

---

*ಹಕಾರಕ್ಕೆ ನ ಆಗಲಿ, ಮ ಆಗಲಿ ಒತ್ತಾಗಿ ಬರುವಲ್ಲಿ ಒತ್ತಕ್ಷರವನ್ನು ಹಕಾರಕ್ಕೆ ಮೊದಲು ಉಚ್ಚರಿಸುವದುಂಟು ಎಂಬದನ್ನು ಮಕ್ಕಳ ಲಕ್ಷ್ಯಕ್ಕೆ ತರತಕ್ಕದ್ದು.

## ದೇವರ ಪ್ರಾರ್ಥನೆ.

ಪರಲೋಕದಲ್ಲಿರುವ ನಮ್ಮ ತಂದೆಯೇ,
ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.
ನಿನ್ನ ರಾಜ್ಯವು ಬರಲಿ.
ನಿನ್ನ ಚಿತ್ತವು ಪರಲೋಕದಲ್ಲಿ ನೆರವೇರುವ ಪ್ರಕಾರ ಭೂಲೋಕದಲ್ಲಿಯೂ ನೆರವೇರಲಿ.
ನಮ್ಮ ಅನುದಿನದ ಆಹಾರವನ್ನು ಈ ಹೊತ್ತೂ ದಯಪಾಲಿಸು.
ನಮಗೆ ತಪ್ಪು ಮಾಡಿದವರನ್ನು ನಾವು ಕ್ಷಮಿಸಿದಂತೆ ನಮ್ಮ ತಪ್ಪುಗಳನ್ನು ಕ್ಷಮಿಸು.
ನಮ್ಮನ್ನು ಶೋಧನೆಯೊಳಗೆ ಸೇರಿಸದೆ ಕೆಡಕನ ಕೈಗೆ ನಮ್ಮನ್ನು ತಪ್ಪಿಸು.
ಯಾಕಂದರೆ, ರಾಜ್ಯವೂ ಬಲವೂ ಮಹಿಮೆಯೂ ಸದಾಕಾಲ ನಿನ್ನವೇ. ಆಮೆನ್.

---

# ಅಕ್ಷರ

| | ಅ | ಆ | ಇ | ಈ | ಉ | ಊ |
|---|---|---|---|---|---|---|
| | । | ಾ | ಿ | ೀ | ು | ೂ |
| ka | ಕ | ಕಾ | ಕಿ | ಕೀ | ಕು | ಕೂ |
| | ಖ | ಖಾ | ಖಿ | ಖೀ | ಖು | ಖೂ |
| ga | ಗ | ಗಾ | ಗಿ | ಗೀ | ಗು | ಗೂ |
| | ಘ | ಘಾ | ಘಿ | ಘೀ | ಘು | ಘೂ |
| nga | ಙ | ಙಾ | ಙಿ | ಙೀ | ಙು | ಙೂ |
| tscha | ಚ | ಚಾ | ಚಿ | ಚೀ | ಚು | ಚೂ |
| | ಛ | ಛಾ | ಛಿ | ಛೀ | ಛು | ಛೂ |
| dja | ಜ | ಜಾ | ಜಿ | ಜೀ | ಜು | ಜೂ |
| | ಝ | ಝಾ | ಝಿ | ಝೀ | ಝು | ಝೂ |
| nja | ಞ | ಞಾ | ಞಿ | ಞೀ | ಞು | ಞೂ |
| tha | ಟ | ಟಾ | ಟಿ | ಟೀ | ಟು | ಟೂ |
| | ಠ | ಠಾ | ಠಿ | ಠೀ | ಠು | ಠೂ |
| dha | ಡ | ಡಾ | ಡಿ | ಡೀ | ಡು | ಡೂ |
| | ಢ | ಢಾ | ಢಿ | ಢೀ | ಢು | ಢೂ |
| nna | ಣ | ಣಾ | ಣಿ | ಣೀ | ಣು | ಣೂ |

# ಮಾಲೆ.

| ಎ | ಏ | ಐ | ಒ | ಓ | ಔ |
|---|---|---|---|---|---|
| ◌ೆ | ◌ೇ | ◌ೈ | ◌ೊ | ◌ೋ | ◌ೌ |
| ಕೆ | ಕೇ | ಕೈ | ಕೊ | ಕೋ | ಕೌ |
| ಖೆ | ಖೇ | ಖೈ | ಖೊ | ಖೋ | ಖೌ |
| ಗೆ | ಗೇ | ಗೈ | ಗೊ | ಗೋ | ಗೌ |
| ಘೆ | ಘೇ | ಘೈ | ಘೊ | ಘೋ | ಘೌ |
| ಙೆ | ಙೇ | ಙೈ | ಙೊ | ಙೋ | ಙೌ |
| ಚೆ | ಚೇ | ಚೈ | ಚೊ | ಚೋ | ಚೌ |
| ಛೆ | ಛೇ | ಛೈ | ಛೊ | ಛೋ | ಛೌ |
| ಜೆ | ಜೇ | ಜೈ | ಜೊ | ಜೋ | ಜೌ |
| ಝೆ | ಝೇ | ಝೈ | ಝೊ | ಝೋ | ಝೌ |
| ಞೆ | ಞೇ | ಞೈ | ಞೊ | ಞೋ | ಞೌ |
| ಟೆ | ಟೇ | ಟೈ | ಟೊ | ಟೋ | ಟೌ |
| ಠೆ | ಠೇ | ಠೈ | ಠೊ | ಠೋ | ಠೌ |
| ಡೆ | ಡೇ | ಡೈ | ಡೊ | ಡೋ | ಡೌ |
| ಢೆ | ಢೇ | ಢೈ | ಢೊ | ಢೋ | ಢೌ |
| ಣೆ | ಣೇ | ಣೈ | ಣೊ | ಣೋ | ಣೌ |

| | | | | | |
|---|---|---|---|---|---|
| ತ | ತಾ | ತಿ | ತೀ | ತು | ತೂ |
| ಥ | ಥಾ | ಥಿ | ಥೀ | ಥು | ಥೂ |
| ದ | ದಾ | ದಿ | ದೀ | ದು | ದೂ |
| ಧ | ಧಾ | ಧಿ | ಧೀ | ಧು | ಧೂ |
| ನ | ನಾ | ನಿ | ನೀ | ನು | ನೂ |
| ಪ | ಪಾ | ಪಿ | ಪೀ | ಪು | ಪೂ |
| ಫ | ಫಾ | ಫಿ | ಫೀ | ಫು | ಫೂ |
| ಬ | ಬಾ | ಬಿ | ಬೀ | ಬು | ಬೂ |
| ಭ | ಭಾ | ಭಿ | ಭೀ | ಭು | ಭೂ |
| ಮ | ಮಾ | ಮಿ | ಮೀ | ಮು | ಮೂ |
| ಯ | ಯಾ | ಯಿ | ಯೀ | ಯು | ಯೂ |
| ರ | ರಾ | ರಿ | ರೀ | ರು | ರೂ |
| ಲ | ಲಾ | ಲಿ | ಲೀ | ಲು | ಲೂ |
| ವ | ವಾ | ವಿ | ವೀ | ವು | ವೂ |
| ಶ | ಶಾ | ಶಿ | ಶೀ | ಶು | ಶೂ |
| ಷ | ಷಾ | ಷಿ | ಷೀ | ಷು | ಷೂ |
| ಸ | ಸಾ | ಸಿ | ಸೀ | ಸು | ಸೂ |
| ಹ | ಹಾ | ಹಿ | ಹೀ | ಹು | ಹೂ |
| ಳ | ಳಾ | ಳಿ | ಳೀ | ಳು | ಳೂ |

| | | | | | |
|---|---|---|---|---|---|
| ತೆ | ತೇ | ತೈ | ತೊ | ತೋ | ತೌ |
| ಥೆ | ಥೇ | ಥೈ | ಥೊ | ಥೋ | ಥೌ |
| ದೆ | ದೇ | ದೈ | ದೊ | ದೋ | ದೌ |
| ಧೆ | ಧೇ | ಧೈ | ಧೊ | ಧೋ | ಧೌ |
| ನೆ | ನೇ | ನೈ | ನೊ | ನೋ | ನೌ |
| ಪೆ | ಪೇ | ಪೈ | ಪೊ | ಪೋ | ಪೌ |
| ಫೆ | ಫೇ | ಫೈ | ಫೊ | ಫೋ | ಫೌ |
| ಬೆ | ಬೇ | ಬೈ | ಬೊ | ಬೋ | ಬೌ |
| ಭೆ | ಭೇ | ಭೈ | ಭೊ | ಭೋ | ಭೌ |
| ಮೆ | ಮೇ | ಮೈ | ಮೊ | ಮೋ | ಮೌ |
| ಯೆ | ಯೇ | ಯೈ | ಯೊ | ಯೋ | ಯೌ |
| ರೆ | ರೇ | ರೈ | ರೊ | ರೋ | ರೌ |
| ಲೆ | ಲೇ | ಲೈ | ಲೊ | ಲೋ | ಲೌ |
| ವೆ | ವೇ | ವೈ | ವೊ | ವೋ | ವೌ |
| ಶೆ | ಶೇ | ಶೈ | ಶೊ | ಶೋ | ಶೌ |
| ಷೆ | ಷೇ | ಷೈ | ಷೊ | ಷೋ | ಷೌ |
| ಸೆ | ಸೇ | ಸೈ | ಸೊ | ಸೋ | ಸೌ |
| ಹೆ | ಹೇ | ಹೈ | ಹೊ | ಹೋ | ಹೌ |
| ಳೆ | ಳೇ | ಳೈ | ಳೊ | ಳೋ | ಳೌ |

# ಅಂಕೆಗಳು.

| | | | |
|---|---|---|---|
| ○ | ಒಂದು | ೧ | 1 |
| ○○ | ಎರಡು | ೨ | 2 |
| ○○○ | ಮೂರು | ೩ | 3 |
| ○○○○ | ನಾಲ್ಕು | ೪ | 4 |
| ○○○○○ | ಐದು | ೫ | 5 |
| ○○○○○○ | ಆರು | ೬ | 6 |
| ○○○○○○○ | ಏಳು | ೭ | 7 |
| ○○○○○○○○ | ಎಂಟು | ೮ | 8 |
| ○○○○○○○○○ | ಒಂಬತ್ತು | ೯ | 9 |
| ○○○○○○○○○○ | ಹತ್ತು | ೧೦ | 10 |

# ಕೂಡಿಸುವುದು.

| | | | | | | | | |
|---|---|---|---|---|---|---|---|---|
| ○ | ○ | ○ | ○ | ○ | ○ | ○ | ○ | ○ |
| ○ | ○○ | ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ |
| ೨ | ೩ | ೪ | ೫ | ೬ | ೭ | ೮ | ೯ | ೧೦ |

| | | | | | | | |
|---|---|---|---|---|---|---|---|
| ○○ | ○○ | ○○ | ○○ | ○○ | ○○ | ○○ | ○○ |
| ○○ | ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ |
| ೪ | ೫ | ೬ | ೭ | ೮ | ೯ | ೧೦ | ೧೧ |

| | | | | | | | |
|---|---|---|---|---|---|---|---|
| ○○○ | ○○○ | ○○○ | ○○○ | ○○○ | ○○○ | ○○○ | ○○○ |
| ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ | ○○○○○○○○○○ |
| ೬ | ೭ | ೮ | ೯ | ೧೦ | ೧೧ | ೧೨ | ೧೩ |

| | | | | | | |
|---|---|---|---|---|---|---|
| ○○○○ | ○○○○ | ○○○○ | ○○○○ | ○○○○ | ○○○○ | ○○○○ |
| ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ | ○○○○○○○○○○ |
| ೮ | ೯ | ೧೦ | ೧೧ | ೧೨ | ೧೩ | ೧೪ |

# ಕಳೆಯುವುದು.

| | | | | | | | | |
|---|---|---|---|---|---|---|---|---|
| ○ | ○○ | ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ |
| ○ | ○ | ○ | ○ | ○ | ○ | ○ | ○ | ○ |
| ೦ | ೧ | ೨ | ೩ | ೪ | ೫ | ೬ | ೭ | ೮ |
| ○○ | ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ | |
| ○○ | ○○ | ○○ | ○○ | ○○ | ○○ | ○○ | ○○ | |
| ೦ | ೧ | ೨ | ೩ | ೪ | ೫ | ೬ | ೭ | |
| ○○○ | ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ | ○○○○○○○○○○ | |
| ○○○ | ○○○ | ○○○ | ○○○ | ○○○ | ○○○ | ○○○ | ○○○ | |
| ೦ | ೧ | ೨ | ೩ | ೪ | ೫ | ೬ | ೭ | |
| ○○○○ | ○○○○○ | ○○○○○○ | ○○○○○○○ | ○○○○○○○○ | ○○○○○○○○○ | ○○○○○○○○○○ | | |
| ○○○○ | ○○○○ | ○○○○ | ○○○○ | ○○○○ | ○○○○ | ○○○○ | | |
| ೦ | ೧ | ೨ | ೩ | ೪ | ೫ | ೬ | | |

BASEL MISSION PRESS, MANGALORE.

# CANARESE PRIMER

BY

CHR. MABEN

## ADAPTED TO THE REQUIREMENTS OF THE INFANT STANDARD

APPROVED BY THE MADRAS TEXT-BOOK COMMITTEE
AND RECOGNISED BY THE
DIRECTOR OF PUBLIC INSTRUCTION, MADRAS

Thirteenth Edition: 10,000 Copies

# ಕನ್ನಡ ಮೂಲಪಾಠಕ

ಬಾಲಕ ದರ್ಜೆಯ ಉಪಯೋಗಾರ್ಥವಾದದ್ದು




MANGALORE
BASEL MISSION BOOK AND TRACT DEPOSITORY
1908

